ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ 19ನೇ ಜುಲೈ, 2019

ಶಿವಮೊಗ್ಗ ನಗರದಲ್ಲಿ ಪ್ರತಿದಿನ ಎಷ್ಟು ಟನ್ ಕಸ ವಿಲೇವಾರಿ

ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

387 (450) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಶಿವಮೊಗ್ಗ ನಗರದಲ್ಲಿ ಪ್ರತಿದಿನ ಎಷ್ಟು ಟನ್ ಕಸ ವಿಲೇವಾರಿ ಮಾಡಲಾಗುತ್ತಿದೆ ; ಗುತ್ತಿಗೆದಾರರಿಗೆ ಕಸ ವಿಲೇವಾರಿಗಾಗಿ ದಿನವೊಂದಕ್ಕೆ ಪಾವತಿಸುತ್ತಿರುವ ಹಣವೆಷ್ಟು ; ಇವರಿಗೆ ಪಾವತಿಸಿದ ಒಟ್ಟು ಹಣವೆಷ್ಟು ; (ವಿವರ ನೀಡುವುದು)

(ಆ) ನಗರದ ಪ್ರತಿ ಕುಟುಂಬದಿಂದ ಕಸದ ಸೆಸ್ ಆಗಿ ಹಣ ವಸೂಲು ಮಾಡಲಾಗುತ್ತಿದೆಯೇ ; ಒಟ್ಟು ಆದಾಯ ಮತ್ತು ಖರ್ಚು ಎಷ್ಟು ;

(ಇ) ನಗರದಲ್ಲಿ ಕುಡಿಯುವ ನೀರಿಗೆ ವರ್ಷವೊಂದಕ್ಕೆ ತಗಲುವ ವೆಚ್ಚವೆಷ್ಟು ; ನೀರು ಬಳಕೆದಾರರಿಂದ ಬರುತ್ತಿರುವ ಆದಾಯವೆಷ್ಟು ;(ವಿವರ ನೀಡುವುದು)

(ಈ) ನಗರದಲ್ಲಿ ಎಷ್ಟು ಮನೆಗಳಿವೆ ; ಅನಧಿಕೃತವಾಗಿ ನೀರು ಸರಬರಾಜು ಆಗುತ್ತಿರುವುದನ್ನು ಪತ್ತೆ ಹಚ್ಚಲಾಗಿದೆಯೇ ; ಇದನ್ನು ತಡೆಯಲು ಇಲಾಖೆ ಕೈಗೊಂಡಿರುವ ಕ್ರಮಗಳೇನು ; (ವಿವರ ನೀಡುವುದು)

(ಉ) ನಗರದಲ್ಲಿ ಒಟ್ಟು ಎಷ್ಟು ಅನಧಿಕೃತ ಕಟ್ಟಡಗಳಿವೆ ; ಮನೆ ಸಂಖ್ಯೆ ನೀಡದಿರುವ ಕಟ್ಟಡಗಳ ಮೇಲೆ ಸರ್ಕಾರ ಕೈಗೊಂಡ ಕ್ರಮಗಳೇನು ? (ವಿವರ ನೀಡುವುದು)